ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ಮೈಸೂರು-ಚಾಮರಾಜನಗರ ಜಿಲ್ಲೆಗಳಲ್ಲಿ ಹುಲಿ, ಚಿರತೆ ಮತ್ತು ಕಾಡಾನೆಗಳ ಹಾವಳಿ ಬಗ್ಗೆ

ಶ್ರೀಎಸ್.ನಾಗರಾಜ್(ಸಂದೇಶ್‌ನಾಗರಾಜ್)(ಸ್ಥಳೀಯಸಂಸ್ಥೆಗಳಕ್ಷೇತ್ರ):-

282 (332) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ ಒಂದು ವರ್ಷದಲ್ಲಿ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯಲ್ಲಿ ಹುಲಿ, ಚಿರತೆ ಮತ್ತು ಕಾಡಾನೆಗಳ ದಾಳಿಯಿಂದ ಮೃತಪಟ್ಟಿರುವ ಹಾಗೂ ಗಾಯಗೊಂಡಿರುವ ರೈತರು, ಸಾರ್ವಜನಿಕರ ಸಂಖ್ಯೆ ಎಷ್ಟು ; ಇವರಿಗೆ ಇಲಾಖೆಯಿಂದ ಪರಿಹಾರವನ್ನು ನೀಡಲಾಗಿದೆಯೇ ; ವನ್ಯ ಪ್ರಾಣಿಯ ದಾಳಿಯಿಂದ ಸತ್ತವರ ಕುಟುಂಬದವರಿಗೆ ನೀಡುವ ಪರಿಹಾರಧನವನ್ನು 25 ಲಕ್ಷÀ ರೂ. ಗಳಿಗೆ ಹೆಚ್ಚಿಸಲು ಕ್ರಮ ತೆಗೆದುಕೊಳ್ಳಲಾಗುವುದೇ ;

(ಆ) ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯಲ್ಲಿ ಕಳೆದ ಒಂದು ವರ್ಷದಲ್ಲಿ ಕಾಡಾನೆ ದಾಳಿಯಿಂದ ಉಂಟಾಗಿರುವ ಬೆಳೆ ಹಾನಿ ಪ್ರಕರಣಗಳು ಎಷ್ಟು; ಪ್ರತಿ ಪ್ರಕರಣದಲ್ಲಿ ಆಗಿರುವ ಹಾನಿಯ ಅಂದಾಜು ಮೊತ್ತ, ಪರಿಹಾರ ನೀಡಿದ ಮೊತ್ತ ಎಷ್ಟು ; (ವಿವರ ಒದಗಿಸುವುದು)

(ಇ) ಕಾಡಾನೆ ದಾಳಿಯನ್ನು ತಡೆಯುವಲ್ಲಿ ಸೋಲಾರ್ ಬೇಲಿ, ಕಂದಕ ಇವುಗಳನ್ನು ಇನ್ನೂ ಬಿಗಿಪಡಿಸಲು ಕ್ರಮ ತೆಗೆದುಕೊಳ್ಳಲಾಗುವುದೇ; ಹಾಗೂ ಕಾಡಿನಲ್ಲಿ ಆನೆಗಳಿಗೆ, ಪ್ರಾಣಿಗಳಿಗೆ ನೀರಿನ ವ್ಯವಸ್ಥೆ ಕಲ್ಪಿಸಲು ಆನೆಗಳಿಗೆ, ಅಗತ್ಯವಾದ ಬಿದಿರು ಮುಂತಾದ ಮೇವನ್ನು ಬೆಳೆಯಲು ಕೈಗೊಂಡಿರುವ ಕ್ರಮಗಳೇನು ; ಇದಕ್ಕಾಗಿ ಕಳೆದ ಮೂರು ವರ್ಷದಲ್ಲಿ ಮಾಡಿರುವ ವೆಚ್ಚ ಎಷ್ಟು ; ಈ ಯೋಜನೆ ಫಲಕಾರಿಯಾಗಿದೆಯೇ ?